# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 295 |
| ಸದಸ್ಯರ ಹೆಸರು | ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 09-12-2020 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕಳೆದ 3 ವರ್ಷಗಳಿಂದ ಮಂಡ್ಯ ಜಿಲ್ಲೆಯಲ್ಲಿ ರೀ ಸರ್ವೆ ದುರಸ್ತಿಗಾಗಿ ಸ್ವೀಕರಿಸಿದ ಅರ್ಜಿಗಳ ಸಂಖ್ಯೆ ಎಷ್ಟು; (ತಾಲ್ಲೂಕುವಾರು ಮಾಹಿತಿ ನೀಡುವುದು) | ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೂಕು, ಆತಗೂರು ಹೋಬಳಿಯಲ್ಲಿ ಮಾತ್ರ ರೀ ಸರ್ವೆ ಕಾರ್ಯ ಕೈಗೊಂಡಿದ್ದು, ರೀ ಸರ್ವೆ ದುರಸ್ತಿಗಾಗಿ ಕಳೆದ **3** ವರ್ಷಗಳಲ್ಲಿ **ಮದ್ದೂರು ತಾಲ್ಲೂಕಿನಲ್ಲಿ 243 ಅರ್ಜಿಗಳು ಸ್ವೀಕೃತವಾಗಿರುತ್ತವೆ**. ಮತ್ತು ಮಂಡ್ಯ ಜಿಲ್ಲೆಯ ಉಳಿದ ತಾಲ್ಲೂಕುಗಳಲ್ಲಿ ರೀ ಸರ್ವೆ ಕೈಗೊಂಡಿರುವುದಿಲ್ಲ. ಆದ್ದರಿಂದ ಈ ತಾಲ್ಲೂಕುಗಳಲ್ಲಿ ರೀ ಸರ್ವೆ ದುರಸ್ತಿಗಾಗಿ ಯಾವುದೇ ಅರ್ಜಿಗಳು ಸ್ವೀಕೃತವಾಗಿರುವುದಿಲ್ಲ |
| (ಆ) | ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೂಕು, ಆತಗೂರು ಹೋಬಳಿ, ಕುಂದನಕುಪ್ಪೆ ಗ್ರಾಮದಲ್ಲಿನ ರೈತರ ಜಮೀನುಗಳಿಗೆ ಸಂಬಂಧಿಸಿದಂತೆ ಜಿಲ್ಲಾಧಿಕಾರಿಗಳ ನ್ಯಾಯಾಲಯದಿಂದ 2019 ರಲ್ಲಿ ರೀ ಸರ್ವೆ ದುರಸ್ತಿಗೆ ಆದೇಶವಾಗಿರುವ ಪ್ರಕರಣಗಳೆಷ್ಟು; (ಸರ್ವೆ ನಂಬರುವಾರು ಮಾಹಿತಿ ಒದಗಿಸುವುದು) | 2019ನೇ ಸಾಲಿನಲ್ಲಿ ಜಿಲ್ಲಾಧಿಕಾರಿಗಳ ನ್ಯಾಯಾಲಯದಿಂದ ರೀ ಸರ್ವೆ ದುರಸ್ತಿಗೆ ಕುರಿತು ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೂಕು, ಆತಗೂರು ಹೋಬಳಿ, ಕುಂದನಕುಪ್ಪೆ ಗ್ರಾಮದ ರೀ.ಸ.ನಂ.**142**ಕ್ಕೆ ಸಂಬಂಧಿಸಿದಂತೆ ಆದೇಶ ಸಂ.ಮೇಲ್ಮನವಿ (ಭೂಮಾಪನ)**/01/2018-19** ದಿನಾಂಕ 30-7-2019 ರಲ್ಲಿ ಒಂದು ಪ್ರಕರಣದಲ್ಲಿ ಆದೇಶವಾಗಿರುತ್ತದೆ. ಸದರಿ ಪ್ರಕರಣದಲ್ಲಿ ಕ್ರಮ ವಹಿಸುವುದು ಮಾತ್ರ ಬಾಕಿಯಿರುತ್ತದೆ |
| (ಇ) | ಸದರಿ ಜಿಲ್ಲಾಧಿಕಾರಿಗಳ ನ್ಯಾಯಾಲಯದ ಆದೇಶದಂತೆ ಕ್ರಮ ಕೈಗೊಂಡ ಪ್ರಕರಣಗಳ ಸಂಖ್ಯೆ ಎಷ್ಟು; ಬಾಕಿ ಇರುವ ಪ್ರಕರಣಗಳ ಸಂಖ್ಯೆ ಎಷ್ಟು; (ಸಂಪೂರ್ಣ ಮಾಹಿತಿ ಒದಗಿಸುವುದು) | |
| (ಈ) | ಜಿಲ್ಲಾಧಿಕಾರಿಯವರ ನ್ಯಾಯಾಲಯದ ಆದೇಶವಿದ್ದರೂ ಕೂಡ ಇದುವರೆಗೆ ಕ್ರಮಕೈಗೊಳ್ಳದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಕ್ರಮ ಕೈಗೊಳ್ಳಲಾಗುವುದು; | ಸರ್ಕಾರದ ಗಮನಕ್ಕೆ ಬಂದಿದೆ.<br>ಜಿಲ್ಲಾಧಿಕಾರಿಗಳ ನ್ಯಾಯಾಲಯದ ಆದೇಶ. ಸಂ. ಮೇಲ್ಮನವಿ (ಭೂಮಾಪನ)/01/2018-19, ದಿನಾಂಕ 30-7-2019 ರಂತೆ ರೀ ಸರ್ವೆ ದುರಸ್ತಿ ಕುರಿತು 30 ದಿನಗಳಲ್ಲಿ ಕ್ರಮ ಕೈಗೊಳ್ಳಲಾಗುವುದು |
| (ಉ) | ಇದುವರೆವಿಗೂ ಈ ಬಗ್ಗೆ ಕ್ರಮ ವಹಿಸದ ಅಧಿಕಾರಿಗಳ ವಿರುದ್ಧ ಕೈಗೊಳ್ಳಲಾಗುವ ಕ್ರಮಗಳೇನು? | ಜಿಲ್ಲಾಧಿಕಾರಿಗಳು ರೀ ಸ.ನಂ 142 ರಲ್ಲಿ ಆಗಿದ್ದ ಹಿಸ್ಸೆಗಳನ್ನು ರದ್ದುಗೊಳಿಸಿ ಆದೇಶಿಸಿದ್ದರಿಂದ, ಜಿಲ್ಲಾಧಿಕಾರಿಗಳ ಆದೇಶದಂತೆ ಎಲ್ಲಾ ಪಹಣಿಗಳನ್ನು ಭೂಮಿ ತಂತ್ರಾಂಶದಲ್ಲಿ ಒಟ್ಟುಗೂಡಿಸಿ ಮಾಹೆ ಜೂನ್ 2020 ರಲ್ಲಿ ಅಳತೆಗೆ ಭೂಮಾಪನ ಶಾಖೆಯಲ್ಲಿ ಸ್ವೀಕೃತವಾಗಿರುತ್ತದೆ. |

| | | |
|---|---|---|
| | | ಈ ವೇಳೆಯಲ್ಲಿ ಕೋವಿಡ್-19 ರ ಹಿನ್ನಲೆಯಲ್ಲಿ ಅಳತೆ ಕೆಲಸ ನಿರ್ವಹಿಸಿರುವುದಿಲ್ಲ. ಪ್ರಸ್ತುತ ದಿನಾಂಕ 16-12-2020 ರಲ್ಲಿ ಅಳತೆಗೆ ದಿನಾಂಕ ನಿಗಧಿಪಡಿಸಿದ್ದು, ಒಂದು ತಿಂಗಳ ಒಳಗಾಗಿ ಜಿಲ್ಲಾಧಿಕಾರಿಗಳ ಆದೇಶದಂತೆ ಕ್ರಮ ವಹಿಸಲಾಗುವುದು. |

**ಸಂಖ್ಯೆ: ಕಂಇ/170/ಎಸ್‌ಎಸ್‌ಸಿ/2020**

**(ಆರ್.ಅಶೋಕ)**
ಕಂದಾಯ ಸಚಿವರು